# 119

# ಹೆಮ್ಮಕ್ಕಳ ಹಾಡುಗಳು

(ದಕ್ಷಿಣ ಕನ್ನಡ ಜಿಲ್ಲೆಯ
ಜಾನಪದ ಗೀತೆಗಳು)

ಸಂಗ್ರಾಹಕರು:

**ಶ್ರೀ ಪಡಾರು ಮಹಾಬಲೇಶ್ವರ ಭಟ್ಟ,**

ಕೊಳನಾಡು.

೧. ಹೆಣ್ಣಿನ ಹಾಡು. ೨. ಮಕ್ಕಳ ಹಾಡು ೩. ಬಸ್ಸುರಿಯ ಹಾಡು. ೪. ಶ್ರೀ ಕೃಷ್ಣ–ಸತ್ಯಭಾಮಾ ಸಂವಾದ [illegible] ಹಾಡು.

1956.



ಒಂದಾಣೆ ಮಾಲೆ

# ಪ್ರತಿ ವಾರವೂ ಕೊಂಡುಕೊಳ್ಳಿರಿ!

"ಒಂದಾಣೆ ಮಾಲೆ"ಯು ಪುಸ್ತಕಗಳು, ಪ್ರತಿ ವಾರ ಪ್ರಕಟವಾಗುತ್ತಿವೆ. ಹೊಸ ಹೊಸ ವಿಷಯಗಳ ಮೇಲೆ ಪುಸ್ತಕಗಳು ಹೊರಡುತ್ತಿವೆ. 1954ನೇ ಸಪ್ಟಂಬರದಿಂದ 1957ನೇ ಜನವರಿ ತಿಂಗಳ ಮೊದಲನೆಯ ವಾರದ ವರೆಗೆ 119 ಪುಸ್ತಕಗಳು ಪ್ರಕಟವಾಗಿದ್ದು, ಇನ್ನೂ ಪ್ರತಿ ವಾರ ಒಂದೊಂದು ಹೊಸ ಪುಸ್ತಕ ಹೊರಡುತ್ತಲೇ ಇದೆ.

119 ಆಣೆಗಳಿಗೆ 'ಒಂದಾಣೆ ಮಾಲೆ'ಯು, ಹೊದಿಕೆ ಕೂಡಿ, ಒಟ್ಟು 2518 ಪುಟಗಳನ್ನು ಕೊಟ್ಟಿರುತ್ತದೆ. ಇಷ್ಟು ಮೊಬಲಗಿಗೆ ಇಷ್ಟು ಪುಟಗಳನ್ನು ಬೇರೆ ಎಲ್ಲಿಯೂ ಯಾವ ಪ್ರಕಟಣೆಯೂ ಕೊಟ್ಟಿಲ್ಲ.

ವಿದ್ವಾಂಸರು ಮಾತ್ರ 'ಒಂದಾಣೆಮಾಲೆ'ಗೆ ಬರೆಯುತ್ತಾರೆ. 'ಅಶ್ಲೀಲ' ಎಂಬ ಅಂಶವೇ ಒಂದಾಣೆಮಾಲೆ'ಯ ಪ್ರಕಟಣೆಗಳಲ್ಲಿರುವುದಿಲ್ಲ.

'ಒಂದಾಣೆಮಾಲೆ' ಪುಸ್ತಕಗಳು ಚಿಕ್ಕ ವಿದ್ಯಾರ್ಥಿಗಳಿಂದ ವಯೋ[illegible]ರ ವರೆಗೆ, ಪ್ರತಿಯೊಬ್ಬನಿಗೂ ಅವಶ್ಯ ಇವೆ. ಇಷ್ಟು ಸುಲಭ ಬೆಲೆಯಲ್ಲಿ [illegible] ಉತ್ತಮ ಸಾಹಿತ್ಯವು, ಈ ಮೊದಲು ಎಲ್ಲಿಯೂ ಒದಗಿಸಲ್ಪಟ್ಟಿಲ್ಲ.

'ಒಂದಾಣೆ ಮಾಲೆ' ಪುಸ್ತಕಗಳನ್ನು ಟಪ್ಪಾಲು ದ್ವಾರಾ ತರಿಸಿಕೊಳ್ಳುವವರು ರೂ. 4—8—0ನ್ನು ಮನಿಯಾರ್ಡರ್ ಮೂಲಕ ಕಳಿಸತಕ್ಕದ್ದು. ಡಿಪಾಜಿಟ್ ಇಡುವವರು ಮಾತ್ರ ಏಜನ್ಸಿಗಾಗಿ ಬರೆದುಕೊಳ್ಳತಕ್ಕದ್ದು.

ವಾರಕ್ಕೆ ಕೇವಲ ಒಂದಾಣೆ ವ್ಯಯದಿಂದ ಒಂದು ಉತ್ಕೃಷ್ಟ—ಉಪಯುಕ್ತ ಪುಸ್ತಕವನ್ನು ಹೊಂದುವ ಈ ಯೋಜನೆಯ ಸದುಪಯೋಗ ಮಾಡಿಕೊಳ್ಳಿರಿ.

ಒಂದಾಣೆ ಮಾಲೆ, ಪ್ರಭಾತ ಆಫೀಸು, ರಥಬೀದಿ,
ಮಂಗಳೂರು-1.

ANNA PUBLICATIONS, CAR STREET, MANGALORE-1.

# ಮುನ್ನುಡಿ

ಕನ್ನಡನಾಡಿನಲ್ಲಿ ಜಾನಪದ ಸಾಹಿತ್ಯವು ಚೆನ್ನಾಗಿ ಬೆಳೆದು ಬಂದಿದೆ. ಹಳ್ಳಿ ಹಳ್ಳಿಗಳಲ್ಲಿ ನಮ್ಮ ಹೆಂಗುಸರು ಹಾಡುತ್ತಾ ಅದು ಇಂದಿಗೂ ಬಳಕೆಯಲ್ಲಿದೆ. ಆದರೆ, ಕೆಲವು ವರ್ಷಗಳಿಂದೀಚೆಗೆ ಮಾತ್ರ ಅದರ ಬಳಕೆ ಕಡಿಮೆಯಾಗಿ ಅಳಿದುಹೋಗುವ ಭಯವೂ ಕಂಡು ಬರುತ್ತದೆ. ಮೈಸೂರು, ಧಾರವಾಡ—ಕಡೆಗಳಲ್ಲಿ ಅವುಗಳನ್ನೆಲ್ಲ ಸಂಗ್ರಹಿಸಿ ಅಚ್ಚುಹಾಕಿಸುವ ಯತ್ನ ನಡೆದಿದೆ. ಆದರೆ ನಮ್ಮೊ ಕನ್ನಡ ಜಿಲ್ಲೆಯಲ್ಲಿ ಈ ತನಕ ಜಾನಪದ ಹಾಡುಗಳು ಒಂದೇ ಸಂಗ್ರಹವಾಗಿ ಬಂದಿಲ್ಲ. ಈ ಲೋಪವನ್ನು ಹೋಗಲಾಡಿಸುವು ದಕ್ಕಾಗಿ, ಈ ಕೃತಿಯನ್ನು ಕನ್ನಡಿಗರ ಮುಂದಿರಿಸುತ್ತೇವೆ.

ಇಲ್ಲಿ ಮಂಗಳೂರು ಕಡೆಯ ತ್ರಿಪದಿ ಹಾಡುಗಳನ್ನು ಸಂಗ್ರಹಿ ಸಿದ್ದೇವೆ. ಭಾಷೆಯು ಸರಳವಾಗಿರುವುದರಿಂದ ಯಾರೂ ಅರ್ಥ ಮಾಡಿಕೊಳ್ಳಬಹುದಾಗಿದೆ. ಮೈಸೂರಿನ, ಧಾರವಾಡದ ಆಡು ಗನ್ನಡದಂತೆ ಮಂಗಳೂರಿನ ಹವ್ಯಕರ ಮನೆಮಾತಾದ ಕನ್ನಡಕ್ಕೂ ಒಂದು ವೈಶಿಷ್ಟ್ಯವಿದೆ; ಅಂತೆಯೇ ಇಲ್ಲಿಯ ಜನಜೀವನ ಕೂಡ. ಆದರೆ, ಹೆಣ್ಣುಹೃದಯವು ಎಲ್ಲಾ ಕಡೆಗಳಲ್ಲೂ ಒಂದೇ ತರ. ಅವ ನ್ನೆಲ್ಲ ಇಲ್ಲಿ ಸಹೃದಯ ಕನ್ನಡಿಗರು ಮನಗಾಣಬಹುದು.

**ಪಡಾರು ಮಹಾಬಲೇಶ್ವರ ಭಟ್ಟ.**



# ಹೆಮ್ಮಕ್ಕಳ ಹಾಡುಗಳು

## ಹೆಣ್ಣಿನ ಹಾಡು

ಹೆಣ್ಣು ಹುಟ್ಟಿತ್ತೆಂದು ಅಣ್ಣ ಚಿಂತಿಸಬೇಡ
ಹೆಣ್ಣೆಂಬ ಪರರ ಒಡವೆಯಾ ಕೊಟ್ಟಾರೆ
ಹೋಪಲಕ್ಕು ನಮಗೆ ಬರಲಕ್ಕು ॥ ೧ ॥

ಹೆಣ್ಣ ಹೆತ್ತಬ್ಬೆಗೆ ಒಮ್ಮೆಯೂ ಸುಖವಿಲ್ಲೆ
ಬಣ್ಣವನಳುಸಿ ಬಳಿಕಳುಗಿ ಹೋಪಾಗ
ಕಣ್ಣು ನೀರೆರೆದು ಕೊಡಲಾಗ ॥ ೨ ॥

ಬೇನೆ ತಾಳಿದಳಲ್ಲ ಮದ್ದು ಕುಡಿದವಳಲ್ಲ
ಬೆಸಿ ನೀರ ಮಿಂದ ಇವಳಲ್ಲ ಆದಾರೂ
ಮಗಳೆಂದು ಡಾರೆ ಎರೆವಳೂ ॥ ೩ ॥

ಉಂಬ ತುತ್ತನು ಕೊಟ್ಟೆ, ಉಂಬಲ್ಯಂಗೆಲೆ ಕೊಟ್ಟೆ
ಒಂಬತ್ತು ವರ್ಷ ಸಲಹಿದೆ, ಸಲಹಿ ಸಾಕಿದ ಮಗಳ
ಇಂದು ನಿಮ್ಮ ಕೈಯ್ಯ ಕೊಡುತೇವೆ ॥ ೪ ॥

ಕೊಟ್ಟರೇನಾಯಿತು ಅಟ್ಟಡಿಗೆ ಉಂಡಾಳು
ಪಟ್ಟೆ ಮಂಚದಲಿ ಕುಳಿತಾಳು ! ಕುಳಿತಾಳು ನಿಮ್ಮ ಮಗಳು
ಇದ್ದರೆ ಸಾಕು ಮನೆಯಲ್ಲಿ ॥ ೫ ॥

ಅಳಿಯ ಬಂದಾಮನೆ ಅರಸು ಬಂದಂತಿಕ್ಕು
ಅರುಶಿನ ಚೇಲಿ ಸವೆದಿಕ್ಕು ಅಣ್ಣನೇ
ಅರಸಲ್ಲ ನಮ್ಮ ಅಳಿಯಂದ್ರು ॥ ೬ ॥

ಅತ್ತಿಗೆ ತಾಯಲ್ಲ ಹಿತ್ತಾಳಿ ಚಿನ್ನಲ್ಲ
ಮತ್ತೆ ಬಂದಣಿಕ ಮರನಲ್ಲ ಹೆಣ್ಮಕ್ಕೊಗೆ
ಹುಟ್ಟಿದ ಮನೆಯು ನಿಜವಲ್ಲ ॥ ೭ ॥

ತಾಯಿದ್ದರೆ ತವರ್ಮನೆ ನೀರಿದ್ದರೆ ಕೆರೆಬಾವಿ
ತಾಯಿಯಿಲ್ಲದ್ದ ತವರಿಂಗೆ ಹೋದರೆ
ಕಾಲಡಿ ಕಸವಿನಂತಕಷ್ಟ ॥ ೮ ॥

ತಾಯಿಲ್ಲದ ತವರಿಂಗೆ ಹೋಗಿಬರುವುದು ಕಷ್ಟ
ನೀರಿಲ್ಲದ ಕೆರೆಗೆ ಪಶುಹೋಗಿ ಬಪ್ಪಾಂಗೆ
ನಾಹೋಗಿ ಬಪ್ಪೆ ತವರಿಂಗೆ ॥ ೯ ॥

ಬಂಧುಗಳಿದ್ದರೆ ಬಂದೆನ್ನ ಕಾಣರೊ
ಬಂಧುಗಳಿಲ್ಲೆ ಪರದೇಶದಲಾನಿದ್ದೆ
ಬಂದು ಕಂಡವರು ಒಡಹುಟ್ಟು ॥ ೧೦ ॥

ಒಡಹುಟ್ಟು ಒಂದು ಜನ್ಮ ಕಡೆಲಿ ಜನ್ಮಗಳಿಲ್ಲೆ
ಕಡುಕೋಪ ಬೇಡೊ ಹಿರಿಯಣ್ಣ ಕಡೆಗೆನ್ನ
ಕರಕೊಂಡು ಹೋಗೋ ತವರಿಂಗೆ ॥ ೧೧ ॥

ನಮ್ಮಣ್ಣನಾದರೆ ನಮಗೆ ಬಣ್ಣವ ತಕ್ಕು
ನಮ್ಮಣ್ಣನಲ್ಲ ಪರರಣ್ಣ ಪರರಿಂಗೆ
ತಕ್ಕು ಒಪ್ಪುವ ಹೊಸ ಬಣ್ಣ ॥ ೧೨ ॥

ನಮ್ಮೂರ ಜೈಲಲ್ಲಿ ಹನ್ನೆರಡು ಕೊಡೆ ಕಂಡೆ
ನಮ್ಮಣ್ಣನಪ್ಪು ಬರುವುದು ಅತ್ತಿಗೆ
ಸಣ್ಣಕ್ಕಿ ಎಸರ ಇಡು ಬೇಗ ॥ ೧೩ ॥

ಸುಗ್ಗಿ ಕೈಕೊಯ್ಯಲಿ ಸುರಗಿ ಹೂವಾಗಲಿ
ರಸದಾಳ ಕಬ್ಬು ಕಡಿಯಲಿ ಅಣ್ಣನೇ
ಅಂದಿಂಗಾ ಬಪ್ಪೆ ತವರಿಂಗೆ ॥ ೧೪ ॥

ಉದ್ದ ಸಂಪಿಗೆ ಮೊಗ್ಗು ದುಂಡುಮಲ್ಲಿಗೆ ಹೂಗು
ಬುದ್ಧಿವಂತನಣ್ಣ ಕೊಟ್ಟಿದ್ದಕ್ಕೆ ಆ ಹೂಗು
ಮುದ್ದು ತಂಗ್ಯಂದ್ರು ತುರುಬಿಂಗೆ || ೧೫ ||

ಮಲ್ಲಿಗೆ ಮುಡಿತಂಗಿ ಚಿನ್ನಾಭರಣ ತೊಡು ತಂಗಿ
ದುಂಡುಮಲ್ಲಿಗೆ ಮುಡಿ ತಲೆಗೆ, ಸೌಭದ್ರೆ
ಸಾಹೋಪೊ ನಮ್ಮ ತವರಿಂಗೆ || ೧೬ ||

ಆಷಾಢಮಾಸದಲಿ ಕೂಸಿಂಗೆ ಚಂದ್ರಾವಷ್ಟು
ಬೇಸಗೆಲಿ ಬರಲಿ ಕಳುಸುವೊ ಅಳಿಯನೆ
ಮಾತಾಡಿ ಹೋಗೊ ಮನೆಗೀಗ || ೧೭ ||

---

# ಮಕ್ಕಳ ಹಾಡು

ಮಕ್ಕಳರ್ಥಿ ಉಳ್ಳವಂಗೆ ಮಕ್ಕಳ ಕೊಡ ದೇವ
ಮಕ್ಕೊ ಬೇಡೆಂಡು ತಿರಿದುಂಬ ಬಡವಂಗೆ
ಮಕ್ಕಳ ಕೊಡುಗ ಮನೆತುಂಬ || ೧ ||

ಮುದ್ದು ನೀನಳದಿರು ಎದ್ದಾಗ ಹಾಲುಣ್ಣು
ನಿದ್ದೆಬಂದಾಗ ಪವಡಿಸು ಬಾಲನೀ
ಬುದ್ಧಿಬಂದಾಗ ಹರಿದಾಡು || ೨ ||

ಹರಿದಾಡಿ ಬಪ್ಪಾಗ ಹರಿಯು ಬ್ರಹ್ಮರು ಕಾಯ್ಗು
ಹರಿದಾಡಿ ಜೆಗುಲಲಿ ಇಳಿವಾಗ ಕಿರಿಯನಾ
ಮನೆದೇವರೆ ಕಾಯ್ಗು ನುದಿನ || ೩ ||

ಮುದ್ದು ಬಾಯಿಗೆ ಸೇರ ಬುದ್ಧಿ ಕಿವಿಗೊಳ್ಳೀಗ
ಮುದ್ದು ಬಾಲಂಗೆ ಇದು ಶೀಲ, ನಿನ್ನಂಥ
ಮಕ್ಕಳು ಬೇಕೊ ಮನೆತುಂಬ || ೪ ||

ಬಂಗಾರು ತಾಮುದ್ದು ಬೆಳ್ಳಿ ತಾವರೆಮುದ್ದು
ಹಣ್ಣುಳ್ಳ ಮರಕೆ ಗಿಳಿ ಮುದ್ದು ತಾನಾದರೆ
ತಾಮುದ್ದು ತನ್ನ ತವರಿಂಗೆ ॥ ೫ ॥

ಬಲ್ಲಾಳು ಹಿತ್ತೀಲ ಬಳ್ಳೀಯು ಹೆಸರೇನು
ಬೆಳ್ಳಿಯಾ ದಂಡೆ ಬಿಡುನೀರ ಹಿತ್ತಿಲ
ಬಲ್ಲಾಳು ತಿಂಬ ಬಿಳಿಯೆಲೆ ॥ ೬ ॥

ವಜ್ರದ ಹೆರಳೆ ಬಾ ಮುದ್ದು ಮುಗುಳೆ ಬಾ
ಅಜ್ಜನ ಕೊರಳ ಪದಕವೆ ಬಾಯೆಂದು
ಅಜ್ಜಿ ಮೊಮ್ಮಗನ ಕರೆದಾಳು ॥ ೭ ॥

ಸಣ್ಣ ಸಣ್ಣ ಮಕ್ಕೋಗೆ ಕುಸುಮಾದ ಕುಲಾಯಿ
ಹೊನ್ನ ಜನಿವಾರ ಕೊರಳಿಂಗೆ ಬಾಲಂಗೆ
ಹೊನ್ನಿಲಿ ಸವೆದ ಮಣೆ ಬೇಕು ॥ ೮ ॥

ಎಲ್ಲೋರ ಮಕ್ಕೊಗೆ ಬೆಲ್ಲ ಬಾಳೆಯಹಣ್ಣು
ಏನೂ ಇಲ್ಲದ್ದ ಬಡವರ ಮಕ್ಕೊಗೆ
ತೆಳ್ಳವಿನ ಮೇಲೆ ಹೆರೆತುಪ್ಪ ॥ ೯ ॥

ಇಲ್ಲಿಲ್ಲಿಲ್ಲಿ ಮಕ್ಕೋಗೆ ಹಲ್ಲೆಲ್ಲ ಬಪ್ಪಾಗ
ಎಲ್ಲಿಯೂ ಕಾಣೆ ಎಳೆಬೊಂಡ ಇವನಜ್ಜ
ಕಲ್ಲೊಡೆದು ತೆಂಗ ನೆಡು ಸಿಕ್ಕು ॥ ೧೦ ॥

ಕೂಗುವ ಮಕ್ಕಳ ಅರಸ ಕೊಂಡೋಡಿಕ್ಕು
ಅರಸುತ್ತ ಬಕ್ಕು ನಿನ್ನ ಮಾವ ತಿಳಿದರೆ
ಅರಸನ ಘೂಡ ಅಳುಶುಗು ॥ ೧೧ ॥

ನಿದ್ದೆ ಬಾರದ ಕಣ್ಗೆ ಮದ್ದಾರು ಬಲ್ಲೀರೋ
ಗದ್ದೇಯುತಡಿಯಾ ಗರುಗಾನಕೊಡಿ ತಂದು
ಸೌಭದ್ರೆ ಕಾಡಿಗೆ ಇಡಿಹಚ್ಚು ॥ ೧೨ ॥

ಮಕ್ಕಳಾಟಿಕೆ ಚೆಂದ ಮರುಳುಬುದ್ಧಿಯು ಚೆಂದ
ಎಳೆಗರ್ಭದವಳ ಮುಖ ಚೆಂದ ಮಗನಾ
ತೊಳೆದುಬರುವ ನಡು ಚೆಂದ ॥ ೧೩ ॥

ಹಟ್ಟಿಕೊಟ್ಟಿಗೆ ಚೆಂದ ಹೆರದರಂಗಡಿ ಚೆಂದ
ಬೆಟ್ಟಕ್ಕೆ ಬಿದುರ ಕೊಡಿ ಚೆಂದ, ಕಿರುಬಾಲ
ಎಷ್ಟು ಚೆಂದ ನಮ್ಮ ಬಳಗಕ್ಕೆ ॥ ೧೪ ॥

ಅಣ್ಣ ತಮ್ಮಣ್ಣನು ಬೆಣ್ಣೆಯ ತಿಂಬೋನು
ಗಿಣ್ಣಲ್ಲಿ ಹಾಲ ಕುಡಿವೊನು, ಮನೆಯಲ್ಲಿ
ಹನ್ನೆರಡೆಮ್ಮೆ ಎಳೆಕಂಜಿ ॥ ೧೫ ॥

ಅಣ್ಣನು ತಮ್ಮನು ಎಣ್ಣೆ ಮಜ್ಜನಮಾಡಿ
ಹೊನ್ನಗುಂಡೀಲಿ ಸುಳಿದಾಡಿ ಬಪ್ಪಾಗ
ಅಣ್ಣಂದ ತಮ್ಮ ಕಡುಜಾಣ ॥ ೧೬ ॥

ಆಡಿ ಉಂಡವ ಕೆಟ್ಟ ಕೇಡಃ ನೆನೆದವ ಕೆಟ್ಟ
ನೋಡದ್ದೆ ಕೆಟ್ಟ ಬೆಳೆ ಭೂಮಿ, ಸೋದರರ
ಹೆಣ್ಣು ತಂದು ಕೆಟ್ಟ ಅತಿ ಹೆಡ್ಡ ॥ ೧೭ ॥

ಅಬ್ಬೇಗೆ ಬಡಿದವನ ಗುಬ್ಬಿಗೂಡೆಳೆದವನ
ಹಬ್ಬದಿ ಪಶುವ ಬಡಿದವನ ಪಾಪಿಯಾ
ಅಂತವನ ದೋಷ ತನಗೆಂದ ॥ ೧೮ ॥

ಆಚಾರಕ್ಕರಸಾಗು ನೀತಿಗೆ ಪ್ರಭುವಾಗು
ಮಾತಿನಲಿ ಚೂಡಾಮಣಿಯಾಗು ಬಾಲನೀ
ಜೋತಿಯೋ ಆಗು ಜಗಕೆಲ್ಲ ॥ ೧೯ ॥

ದೇವರ ನೆನೆದರೆ ಸಾವ್ಹುಟ್ಟು ನಮಗಿಲ್ಲೆ
ಹಾವಾತುಳಿದರೆ ಭಯವಿಲ್ಲೆ ಸರ್ಪನಾ
ಹೆಡೆ ತಲೆಯುಮೇಲೆ ವಿಷವಿಲ್ಲೆ ॥ ೨೦ ॥

ಸಂಜೆಯು ಹೊತ್ತಿಂಗೆ ಮಕ್ಕಳ ಬೈಯ್ಯದಿರಿ
ಎಂಜೆಲು ಮೈಲಿಗೆಯು ಎಡಕೊತ್ತಿ ಒತ್ತಿ
ಸಂಜೆ ಶೀರೆರೆದು ದೆಸಿಗೊಳ್ಳಿ ॥ ೨೧ ॥

ಸಂಜೇಯು ಹೊತ್ತಿಂಗೆ ಅಂಗ್‌ಬಾಯ್ತ್ತಿಗವೊಳ
ಪಾಪಿಯಾ ಅಂತಹಳ ಮನೆಯಲ್ಲಿ ಬಂದು
ನಿಲ್ಲಾಳು ಮಹಾ ಲಕ್ಷುಮಿ ॥ ೨೨ ॥

ಹೆಂಡತ್ತಿ ಕಿರಿಕೂಸು ತಂದು ದಂಡಿಸಿದವನ
ಹೆಂಡವ ಕುಡಿದು ತಿರುಗ್ವೋನ, ಪಾಪಿಯಾ
ಅಂತವಥ ದೋಷತನಗೆಂದ ॥ ೨೩ ॥

ಕಣ್ಣುಕಾಣದ ಪಕ್ಷಿ ಹಣ್ಣುಳ್ಳವನಕ್ಹೋಗ
ಹಣ್ಣೆಂದು ಮೆಲುಗು ಕಸಕಾಯು ಆ ಹಕ್ಕಿ
ಹಾಳೆಂದು ಕುಡಿಗು ಹನಿನೀರ ॥ ೨೪ ॥

ಬಡತನವೇ ನೀಯೆನ್ನ ಬಿಡದೆ ಬೆನ್ನಲಿ ಬಂದೆ
ಕಡುಕಷ್ಟಗೊಳಿಸಿ ದಣಿಸಿದೆ ಹೊನ್ನುಳ್ಳ
ಹೊಲಯುಂಗೆ ಕೈಯ್ಯ ಮುಗಿಸಿದೆ ॥ ೨೫ ॥

ಹರುವಾಯಿತೆಂದರೆ ದೆಸೆಯೊಳೊಬ್ಬರ ಕಾಣೆ
ಹರುವಾಬಲ್ಲಬ್ಬೆ ಒಳಗಿಲ್ಲೆ ಹೊರಗಿಲ್ಲೆ
ದೆಸೆನೋಡಿ ಬಾಳ ಬಡವಾದೆ ॥ ೨೬ ॥

ಬಿದ್ದಕಿತ್ತುವರಿಲ್ಲೆ ಬೆನ್ನ ತಾಂಗುವರಿಲ್ಲೆ
ಆ ನಿದ್ದೆ ಎಂಬ ಹಿತರಿಲ್ಲೆ ದೇವರೇ
ತಾಯಂತೆ ನೀವೇ ಸಲಹಿರೋ ॥ ೨೭ ॥

ಮಣ್ಣನ್ನು ನಂಬುವೆ ಮಣ್ಣಿಂದ ಬದುಕುವೆ
ಮಣ್ಣಿನಗೆ ಮುಂದೆ ಹೊನ್ನ ಕೊಡುಗು ಅಣ್ಣಯ್ಯ
ಮಣ್ಣೆ ಲೋಕದಲಿ ಬೆಲೆಬಾಳ್ತು ॥ ೨೮ ॥

ತುಪ್ಪಶನ ಉಂಬೋಲೆ ತುಳುನಾಡಿಂಗ್ಹೋಯೆ
ಅಕ್ಕಿಯು ಮೇಲೆ ಬರೆ ಇಲ್ಲೆ ತುಳುನಾಡು
ಮಕ್ಕಳ ಪೋಲೆ ಕಲೆ ಇಲ್ಲೆ ॥ ೨೯ ॥

ತುಂಬಿ ತುಳುನಾಡಿಂದ ಬಂದವೆರಡು ದನ
ಕೊಂಬಿಂಗೆ ಚೌರಿಕಿರಿಗೆಜ್ಜೆ ಕಟ್ಟಿಕೊಂಡು
ಬಂದವು ನಮ್ಮ ಬೈಲಿಂಗೆ ॥ ೩೦ ॥

ಹಾಲುಳ್ಳ ಹಸುತಾಯೆ ಬಾನಮ್ಮ ಕೊಟ್ಟಗೆಗೆ
ಕೀಲುಕಂಬಕ್ಕೆ ಕರುಕಟ್ಟಿ ಕರೆದರೆ
ಏಳು ಚೆಂಬಿನಲಿ ನೊರೆಹಾಲು ॥ ೩೧ ॥

ಹಿಂಡೆಮ್ಮೆ ಕರೆಯುಲಿ ತೊಂಡೆಕಾಯಾಗಲಿ
ದಿಂಡಿನಾ ಬಾಳೆಗೊನೆ ಬಿಡಲಿ ದೇವರಿಗೆ
ಕೊಂಡೊಪ್ಪಿಸುವೆ ನೊರೆಹಾಲು ॥ ೩೨ ॥

ಹಟ್ಟೀಯು ಕೆಸರೆಂದು ಮೆಟ್ಟನಿಲ್ಲದು ಕಬಿಲೆ
ಕಟ್ಟಿಸಿದ ಅಪ್ಪ ನೆಲೆಕಟ್ಟು ನೆಲೆಕಟ್ಟು
ಮೆಟ್ಟಿ ಸುರಿವುದು ನೊರೆಹಾಲು ॥ ೩೩ ॥

ಮಾವನ ಮನೆಯಲ್ಲಿ ಮಣಿಕಟ್ಟಿದ್ದೆಮ್ಮೆ
ಮಾವನ ಮಡದಿ ಶ್ರೀದೇವಿಯುಲ್ಲದೆ
ಆಯೆಮ್ಮೆ ಕರೆಯುವು ನೊರೆಹಾಲು ॥ ೩೪ ॥

\- - - - - - - - -

## ಬಸುರಿಯ ಹಾಡು

ಗುರು ಗಣಪತಿಯುರ ದೇವಿ ಸರಸ್ವತಿಯುರ
ವರಕವಿಜನರ ಸ್ಮರಿಸುತ್ತ, ಸ್ಮರಿಸುತ್ತ ಸಂತಸದಿ
ಸುರಪಾದ್ಯ ಮಾರಾರಿಗೆರಗುತ್ತ ॥ ೧ ॥

ಧರೆಯೊಳತ್ಯಧಿಕವಾಗಿರ್ದ ದೇಶದ ರಾಯ
ನರಸಿ ಸಂತಸದೀ ಧರಿಸಿರ್ದ, ಧರಿಸಿರ್ದ ಗರ್ಭದಾ
ಪರಿಯಾನುಸುರುವೆ ಮುದಾದಿಂದ ‖ ೨ ‖

ಒಂದು ದಿವಸ ಭೂಪಾನಂದದಿ ಕುಳಿತಿರೆ
ಕಂದೀದಾನನದೀ ಬಡವಾಗಿ, ಬಡವಾಗಿ ಸತಿತನ್ನ
ಮುಂದೆ ನಿಂತಿರಲು ನುಡಿಸಿದ ‖ ೩ ‖

ಮಾನಿನಿಮಣಿ ನಿನ್ನ ಆನನ ಬಾಡೀಹು
ದೇನೆನೋಹಂನೆ ಗುಣರಂನೆ, ಗುಣರಂನೆಯುಂದೆನುತ್ತ
ನಾಚುತ ನುಡಿದಾಳರಸಂಗೆ ‖ ೪ ‖

ಸೃಷ್ಟಿಯೊಳಗೆ ನೀವು ಪಟ್ಟವಾಳುತ್ತಿರೆ
ಅಷ್ಟಸೌಭಾಗ್ಯದೋಳಗೆಂದು, ಒಳಗೆಂದು ಕೊರತೆ ಸ್ವಾಮಿ
ಪುಟ್ಟದರೆ ಸುತರು ನಮಗೀಗ ‖ ೫ ‖

ಸರಸೀಜಾಂಬಕಿ ನಿನ್ನ ಗುರು ಕುಜದಿ ನೋಡೆ
ಕರಿದಾಗಿ ತೋರ್ವ ಪರಿಯೇನು, ಪರಿಯೇನೆಂದೆನ್ನೊಳು
ಅರುಹಬೇಕವ್ವ ಮುದಾದಿಂದ ‖ ೬ ‖

ಹಸರು ಬಣ್ಣದಿ ಕಾಂತಿಹೊಸದಿರ್ದ ರವಕೆಯು
ಪೊಸತೊಂದು ತೊಟ್ಟಿಯುದರಿಂದ, ಅದರಿಂದ ಮೊಲೆತುದಿ
ಕೆಸರಾದುದೇನೋ ತಿಳಿಯೆನಾ ‖ ೭ ‖

ಉಟ್ಟ ಬಟ್ಟೆಯುಮೇಲೆ ಹೊಟ್ಟೆತೋರುತಲಿದೆ
ಹುಟ್ಟು ಗರ್ಭಿಣಿಯೂ ನಿಜವಾಗಿ, ನಿಜವಾಗಿ ನೀನೆಂಬ
ಗುಟ್ಟ ನಾ ತಿಳದೆ ಮನದೊಳು ‖ ೮ ‖

o o o o o

ಈ ಚೆಲ್ವ ಬಸುರಿನ ಸೂಚಿಸಲ್ಯಾಕಿಷ್ಟು
ನಾಚಿಕೆ ಬರಿದೆ ಮನದೊಳು, ಮನದೊಳು ನಿನಗೆನು
ತ್ತಾ ಚದುರೆಯರು ನುಡಿದಾರು ‖ ೯ ‖

ಎಡೆಗೊಂಡೆಯೆಡೆ ಚೌರಿ ಕಡುಚೆಲ್ವರಾಕುಟ
ವಡನಡ್ಡ ಕೇತಾಕೀಸಹಾನಿತ್ಯ, ಸಹನಿತ್ಯ ಚೆಲುವಿನೊ
ಳಿಡಬೇಕೆಂಡೆನುತ್ತ ನೆನವೆಯೊ ॥ ೧೦ ॥

ಮುತ್ತಿನ ಹಾರಯೋಳ್ ಸುತ್ತೀನಾ ಕಟ್ಟಾಣಿ
ಒತ್ತಿಸೊಳ್ಗುಂಡು ಮಣಿಸರ, ಮಣಿಸರದೆಡೆಗೆಂದ
ಪುತ್ಥಳಿಸರವಾ ನೆನವೆಯೋ ॥ ೧೧ ॥

ಕಡಗ ಕಂಕಣದೆಡೆಗಿಡುವ ದೋರೆಯು ಜೋಡು
ನಡುವಿನೊಳಿಸೆವ ಚಳಕಿಯಾ, ಚಳಕಿಯ ಹಿಂಬಳಿ ಸಹ
ಮುಡದೀ ನೀ ನಿಡಲು ನೆನವೆಯೋ ॥ ೧೨ ॥

ಪಟ್ಟೆಯು ಸೀರೆಯನುಟ್ಟು ಸಂತಸದೊಳು
ತೊಟ್ಟು ವೊಸರವಕೆಯು ಅನುದಿನ, ಅನುದಿನ ಇಡಲೆಂದು
ಪಟ್ಟೇಡಾಬುಗಳ ನೆನವೆಯೋ ॥ ೧೩ ॥

ಅಚ್ಚಮಲ್ಲಿಗೆ ಚೆಲ್ವ ಸಚ್ಛದಸಂಪಿಗೆ
ಹೆಚ್ಚಿನ ಜಾಜಿಸುಮಾಕ್ಯೊದು, ಸುಮಕ್ಯೊದು ಮುಡಿಯಾಲೆಂ
ದಿಚ್ಛೆಯೇನವ್ವ ಮನದೊಳು ॥ ೧೪ ॥

o o o o o

ಕೀರಭಾಷಿಣಿ ಮುದ್ದು ನಾರಿಯು ಬಸುರಿಗೆ
ಆರು ಮಾಸಗಳೂ ಕಳೆದಾವು, ಕಳೆದಾವೆಂದೆನ್ನುತ್ತ
ಧಾರುಣಿಪತಿಗೆ ತಿಳಿಸ್ಯಾಳು ॥ ೧೫ ॥

ಎಸೆ ಕೇಳಿ ಭೂವಿಪ ಮನದಿ ಸಂತೋಷಿಸಿ
ವಿನಯದಿ ಸೀಮಂತ ಹವನವಾ, ಹವನವ ಮಾಳ್ಪರೆ ಶುಭ
ದಿನವ ನಿಶ್ಚಯಿಸಿ ಸೊಬಗಿಂದ ॥ ೧೬ ॥

ಬರಿಸಿ ಚಿತ್ರಕರಿಂದ ಪುರವ ಶೃಂಗರಿಸಿದ
ಪರಿಪರಿವಿಧದಿ ಮುದಾದಿಂದ, ಮುದದಿಂದ ಓಲೆಯಾ
ಧರಣಿಪಾಲರಿಗೆ ಕಳುಹುತ್ತ ॥ ೧೭ ॥

ಜತೆಸಂಟರಿಪ್ಪರ ಹಿತಬಂಧುಬಾಂಧವರ
ಕ್ಷಿತಿಪತಿದಯದಿ ಬರಿಸುತ್ತ, ಬರಿಸಿ ಸೀಮಂತವ
ಥತಿ ಸೊಬಗಿಂದ ವಿರಾಜಿಸೆ || ೧೮ ||

ಮಾನಿನಿಯರು ಕೂಡಿ ಸೀಮಂತಿನೀಯಾಳ
ಸನ್ಮಾನಿಸಿ ಕೇಳಿದರು ಮನಾದಿಪ್ಪ, ಮನದಿಪ್ಪ ಬಯಕೆಯ
ಪ್ರೇಮದೊಳರುಹವ್ವ ನಮಗೀಗ || ೧೯ ||

ಏನೇನು ತಿನಲೆಂದು ಮಾನಸದಿ ಬಯಸಿರ್ಪೆ
ನೀನ್ಯಾಕೆ ಮೌನತಳೆದಿರ್ಪೆ, ತಳೆದಿರ್ಪೆ ಎನುತಲಿ
ಸಾನುರಾಗದಲಿ ನುಡಿದರು || ೨೦ ||

ಗೋಧಿಕಡಲೆ ಮಧುವಾದ ಸಕ್ಕರೆಯೊಳಗಾದ
ಭಕ್ಷಗಳಾ ತಿನಾಲೆಂದು, ತಿನಲೆಂದಭಿಲಾಶೆಯೊಳು
ಮೋದದ ಕಡುಬ ನೆನವೆಯೋ || ೨೧ ||

ಕದಳಿಕಜೂರ್ರವ ದ್ರಾಕ್ಷೆ ಮೊದಲಾದ
ವಿಧವಿಧ ರುಚಿಯ ಫಲಾಪಕ್ವ, ಫಲಪಕ್ವ ತಿನಲೆಂದು
ಪದುಮದಳಾಕ್ಷಿ ಮನಾಸಾಯ್ತೊ || ೨೨ ||

ರಾಕೇಂದು ವದನೆ ಸುಕೋಕಿಲಗಾನೆಗೆ
ಬೇಕಾದ ಮನದ ಬಯಾಕೆಯು, ಬಯಕೆಯ ಕೊಡಿಸುತ್ತ
ನೇಕ ಸಂಭ್ರಮದಿ ಹರಸ್ಯಾರು || ೨೩ ||

ಇತ್ತ ಭೂಪಾಲಕ ಅರ್ಥಿಯೊಳು ಕರಗೆಳ್ತ
ವೆತ್ತಿ ಜಲತಂದು ಸಭೆಗಿತ್ತು, ಸಭೆಗಿತ್ತು ಭೋಜನಕೆ
ಹೊತ್ತಾಯಿತೇಳಿರೆನ್ನೂತ || ೨೪ ||

ಭೂರಿ ವೈಭವದೊಳು ಆರೋಗಣೆಯಗೈಸಿ
ಚಾರುಮನ್ನಣೆಯೊಳವರೆಲ್ಲ, ಅವರೆಲ್ಲ ಮನದಿಪ್ಪ
ಧಾರುಣಿಪಾಲ ಕೊಡಿಸಿದ ||

ಈ ರೀತಿಯೊಳು ಶುಭ ಕಾರ್ಯವ ಪೂರೈಸಿ
ನಾರಿಯು ಸಹಿತ ಸುಖಾದಿಂದ, ಸುಖದಿಂದ ಇರುತಿರೆ
ವೊಂತ್ತು ನವಮಾಸ ಬಸೂರಿಂಗೆ ॥ ೨೬ ॥

ನುಡಿದಳೊಂದಿನದೊಳು ತಡೆಯುಲಾರದೆ ಸತಿ
ನಡುನೋವ ಪರಿಯು, ಸಖಿಯೊಳು, ಸಖಿಯೊಳು ಪೇಳಿದಳು
ಒಡಲ ವೇದನೆಯು ನಡುಗುತ್ತ ॥ ೨೭ ॥

ಹಸುತೃಷೆಗಳು ಕೆಟ್ಟು ಬಸುರಿಗುಬ್ಬಸ ಹುಟ್ಟಿ
ವಶತಪ್ಪಿತವ್ವಾ ಅವಯುವ, ಅವಯುದೊಡನೇ
ಉಸಿರಲಂಜುವೆನು ಮನದೊಳು ॥ ೨೮ ॥

ಎಂತುಪೇಳಲಿ ನಾನೆಂತು ತಾಳಲಿ ಕಾಂತೆ
ಯೆಂತು ಸೈರಿಸಲಿ ಬಸೂರಿನ, ಬಸುರಿನ ವೇದನೆಯು
ಯಿಂತಾಯ್ತೆಂದೂ ಪೇಳಲಳವಲ್ಲ ॥ ೨೯ ॥

ಎಂದೆನುತೀ ಪರಿಯಿಂದಲಿ ಸೂತಿಕ
ಮಂದಿರಕಾಗಿ ನಡೆತಂದು, ನಡೆತಂದು ಶುಭದಲ್ಲಿ
ಕಂದನ ಪಡೆದಳಂಬುಜಾಕ್ಷಿ ॥ ೩೦ ॥

ಭಕ್ತವತ್ಸಲಕಾಯೊ, ನಿತ್ಯನಿರ್ಮಲ ಕಾಯೊ
ಸತ್ಯಾತ್ಮ ಕಾಯೊ ಕುವರ, ಕುವರನ ಸಹಿತೆಂದು
ಸತ್ಯದೇವನ ಸ್ತುತಿಸ್ಯಾರು ॥ ೩೧ ॥

--------

# ಶ್ರೀ ಕೃಷ್ಣನ ಕುರಿತು

## (ಶ್ರೀಕೃಷ್ಣ–ಸತ್ಯಭಾಮಾ ಸಂವಾದ)

ಬದ್ಧಗಾರನು ಎಂದು ಬಾಳ ನಂಬಿದೆ ಸ್ವಾಮಿ
ಬಿದ್ದ ಗಾಯುಗಳೇನು, ಹೇಳಿರೇ ಸ್ವಾಮಿ,
ಬಿದ್ದ ಗಾಯುಗಳೇನು ಹೇಳಿ ॥ ೧ ॥

ಉಗುರುಗುರಿನ ಗಾಯ ಉಗುರಿನ ಕೊನೆಗಾಯ
ಚಲುಗುರಿನ ಗಾಯವೇ ಹೇಳರೆ ಸ್ವಾಮಿ
ಚಲುಗುರಿನ ಗಾಯವೇ ಹೇಳ ‖ ೧ ‖

ನಟ್ಟಿರ್ದ ಗಜನಿಂಬೆ ಮರವೇರಿ ಕೊಯ್ವಾಗ
ಮುಳ್ಳು ಕುಟ್ಟಿದ ಗಾಯ ಕೇಳಲೆ ಜಾಣೆ
ಮುಳ್ಳು ಕುಟ್ಟಿದ ಗಾಯವೆ ‖ ೨ ‖

ಕುಟಿಲ ಸೋಜಿಗವೇನು ನಯನ ಕೆಂಪಡರಿತು
ಕುಟಿಲವೆ ಪೇಳೆನಗೆ ಹೇಳರೆ ಸ್ವಾಮಿ
ಕುಟಿಲವೆ ಪೇಳೆನಗೆ ಹೇಳ ‖ ೩ ‖

ಮಧ್ಯಾಹ್ನ ಹೊತ್ತಲಿ ಗೆಳೆಯರೆಲ್ಲರೂ ಕೂಡಿ
ಭಂಗಿಯ ಸೇದಿದೆನು ಕೇಳಲೆ ಜಾಣೆ
ಭಂಗಿಯ ಸೇದಿದೆನು ‖ ೪ ‖

ಅರ್ಧವು ರಾತ್ರಿಯಲ್ಲಿ ನಿದ್ರೆಯ ಹೊತ್ತೀಲಿ
ಎದ್ದೆಲ್ಲಿ ಪೋದಿರಿ ಹೇಳರೆ ಸ್ವಾಮಿ
ಎದ್ದೆಲ್ಲಿ ಪೋದಿರಿ ಹೇಳ ‖ ೫ ‖

ಬೇಸಿಗೆ ಬಿಸಿಲಲ್ಲಿ ತಿರುಗಿ ಮೈ ಬೆವರಿತು
ಎದ್ದಾಚೆ ಹೋಗಿದ್ದೆ ಕೇಳಲೆ ಜಾಣೆ
ಎದ್ದಾಚೆ ಹೋಗಿದ್ದೆ ಕೇಳು ‖ ೬ ‖

ಹಾವು ನಿಮ್ಮ ಕೊರಳಲ್ಲಿ ನೀವು ಸೂಳೆ ಮನೆಯಲ್ಲಿ
ಹಾವನ್ನು ಹಿಡಿದೀರೆ ಹೇಳರೆ ಸ್ವಾಮಿ
ಹಾವನ್ನು ಹಿಡಿದೀರೆ ಹೇಳ ‖ ೭ ‖

ಎಷ್ಟು ಹೇಳಿದರು ನೀವು ಮೂರ್ಖಬುದ್ಧಿಯ ಬಿಡಿ
ಹೋಗಲಿಲ್ಲವೆ ನೀವು ಸೂಳೆಯ ಮನೆಗೆ
ಹೋಗಲಿಲ್ಲವೆ ನೀವು ಹೇಳ ‖ ೮ ‖

ಕಾಶಿ ವಿಶ್ವನಾಥನ ಗುಡಿಯ ಮುಂದಕ್ಕೆ ನಾನು
ಭಾಷೆಯ ಮಾಡಿಸುವೆ ಹೇಳಿರೆ ಸಾವಿ
ಭಾಷೆಯ ಮಾಡಿಸುವೆ ಹೇಳಿ || ೧೦ ||

ಕೇಳಲೆ ಜಾಣೆ, ನಾನಿನ್ನ ಹೊರತು ಬೇರೆಯರ
ಎಂದಿಗೂ ನೊಡಲಿಲ್ಲ, ಈಶ್ವರನಾಣೆ
ಎಂದಿಗೂ ನಾ ನೋಡುವದಿಲ್ಲ || ೧೧ ||

.........

# ಮನೆ ತುಂಬುವ ಹಾಡು

ಬಾಗಿಲ ಮುಂದಣ ಗೆದ್ದೆ ಕದಿರು ಬಂದು
ಬಾಗಿತ್ತು ಅಂಚಂಚು ಗಿಳಿಹೋಗು, ಅಣ್ಣಯ್ನ
ಮಂಚದಿಂದಿದ್ದು ಓಡ್ಸೊಗೂ || ೧ ||

ಮೂಡಲ ಮುಗಿಲೆದ್ದು ಮುನ್ನೂರು ಹನಿ ಬಿದ್ದ
ನಮ್ಮೂರ ಪೈರು ಅಗೆ ಎದ್ದು, ನಮ್ಮಣ್ಣಯ್ಯ
ಬಂದು ಬಿತ್ತಿ ಬೆಳೆಯಾಯ್ತು || ೨ ||

ತೆಂಕಲೆಲರು ಬೀಸಿತೊನ್ನೂರು ಹನಿಸೂಸಿ,
ತೊಂಡಿಲ ಕದಿರು ತೆನೆಹಾಸಿ, ಹಾರೈಸಿ,
ತಂಗಾಳಿ ನೆಲಕ್ಕೆ ಏಮಿರಿತ್ತು || ೩ ||

ಬೆಟ್ಟುಗೆದ್ದಗೊ ನೂರು ಬೈಲುಗೆದ್ದಗೊ ನೂರು
ಎತ್ತುಗೊ ನೂರು, ನೊಗನೂರು, ಅಣ್ಣಯ್ನ
ಸಿರಿಯೊಕ್ಕಲಕ್ಕೆ ಕಳೆಯೇರಿ || ೪ ||

ಪಟ್ಟೆ ಸಾಲೆಯನಾಂತ, ಗಟ್ಟ ಮುರವನುಟ್ಟ
ಕಣ್ಣೆ ಮುಟ್ಟಾಳೆ ತಲೆಗಿಟ್ಟ ಬಳೆತೊಟ್ಟ
ಹೊಂಗದಿರ ಕಳಕೆ ನಡೆಗೊಂಡ || ೫ ||

ಬಣ್ಣಹಚ್ಚಡ ಹೊದೆದದ ರನ್ನಕೊಡಂಗೆಯನೇಲ್ದ
ಚಿನ್ನದುಂಗುರವ ಬೆರಳಿಟ್ಟ ಹೂಗ್ಸೂಡಿ
ಬೆಳ್ಳಿಪಲುಂಗತ್ತಿ ಹಿಡುಗೊಂಡ ॥ ೬ ॥

ಮುತ್ತಿನೊಂಟೆಯನಿಟ್ಟ, ಮುತ್ತು ಹಾರವ ತೊಟ್ಟ
ಮುತ್ತು ರುಮಾಲು ತಲೆಗಿಟ್ಟ, ನಮ್ಮಣ್ಣಯ್ಯ
ಮುತ್ತಿನಂಥ ಕದಿರ ತರಲ್ಹೋದ ॥ ೭ ॥

ಭಾಗ್ಯಲಕ್ಷ್ಮಿ ಬಪ್ಪಾಗ ಬಾಗಿಲಲಿ ಕಾದಿದ್ದೆ.
ಹೂಗು ಅಕ್ಷತೆಯು ಹಿಡಿದಿದ್ದೆ,
ಹೊಲಿ ಬಾರೆ ನಮ್ಮ ಮನೆ ತುಂಬಿ ॥ ೮ ॥

ಕದಿರಮ್ಮ ಬಪ್ಪಾಗ ಎದುರ್ಗೊಂಬಲಾನಿದ್ದೆ,
ಗರತಿಯು ಪುಣ್ಯ ಗಳಿಸಿದ್ದೆ, ಮಹಾಲಕ್ಷ್ಮಿ
ಹೊಲಿ ಬಾರೆ ನಮ್ಮ ಮನೆ ತುಂಬಿ ॥ ೯ ॥

ಪಚ್ಚೆಗುಪ್ಪಸ ಚಿಗುರಿ, ಕೆಚ್ಚಾನೆ ಕುಯ್ಗರಳಿ,
ಕೊಯ್ಲರಕೆ ಕೂಸಿ, ಮಣಿ ಮಾಡಿ, ಎದೆದುಂಬಿ
ಮದನನ ಸೇನೆ ನೆರೆದಿತ್ತು. ॥ ೧೦ ॥

ಹೋಪಾಗ ಹೆಡಗೆಲಿ, ಬಪ್ಪಾಗ ದಂಡಿಗೆಲಿ,
ಮದುಮಗಳಾಗಿ ತಲೆಬಾಗಿ ಸಿರಿದೇವಿ,
ಹೊಲಿಬಾರೆ ನಮ್ಮ ಮನೆ ತುಂಬಿ ॥ ೧೧ ॥

ಮಾಳಿಗೆ ತುಂಬಿತ್ತು ಚಾವಡಿ ತಲ್ಲಣಿಸಿತ್ತು,
ಚಾವಡಿಯು ಕಂಬ ಅಲುಗಿತ್ತು, ನಡುಗಿತ್ತು,
ಹೊಲಿಬಾರೆ ನಮ್ಮ ಮನೆ ತುಂಬಿ ॥ ೧೨ ॥

ಹಟ್ಟಿ ತುಂಬಿತು ನಮ್ಮ ಕೊಟ್ಟಿಗೆ ಮಾಲಿತ್ತು,
ಕೊಟ್ಟಿಗೆಯು ಕಂಬವದುರಿತ್ತು, ಸಿರಿದೇವಿ
ಹೊಳಿಬಾರೆ ನಮ್ಮ ಮನೆ ತುಂಬಿ ॥ ೧೩ ॥

ಇಂದಿರೆ ಮಾದೇವಿ ಚೆಂದದ ಮನೆವಾಳ್ತಿ
ಯಂದದಿ ಸಾಗಿ ಸಲಹಂತೆ, ಕುಂದಣ
ದಾರತಿಯೆತ್ತಿ ಬೆಳಗಿರೊ ॥ ೧೪ ॥



**1906** ಸುವರ್ಣ ಮಹೋತ್ಸವ ವರುಷ **1956**

# ದಿ ಕೆನರಾ ಬೇಂಕಿಂಗ್ ಕೊರ್ಪೊರೇಶನ್ ಲಿಮಿಟೆಡ್

ಪ್ರಧಾನ ಕಾರ್ಯಾಲಯ: ಉಡುಪಿ (ದ. ಭಾರತ)

## 50 ವರುಷಗಳ ಹಿಂದೆ

— ನಮ್ಮ ಬೇಂಕು ಸ್ಥಾಪನೆಗೊಂಡಾಗ ಅದಕ್ಕೆ ಯಾವೊಂದೂ ಸ್ಥಾನಮಾನಗಳು ಇದ್ದಿಲ್ಲವೆಂದೇ ಹೇಳಬಹುದು; ಕಾರಣ, ದಿನಾಂಕ 12-3-1906ರ — ಅಂದರೆ ಬೇಂಕು ವಹಿವಾಟುಗಳನ್ನು ನಡೆಸಲು ಆರಂಭಿಸಿದ ದಿನದ ಅಂತ್ಯದಲ್ಲಿ, ಇದರ ವಹಿವಾಟುಗಳ ಮೊತ್ತವು ಕೇವಲ ರೂ. 38-13-3 ಆಗಿತ್ತು.

## ಆದರೆ ಈಗ?

ಇದರ ಒಟ್ಟು ಚಲಾವಣೆ ಭಂಡವಾಳವು 50 ಮಿಲಿಯ ರೂಪಾಯಿಗಳಿಗೂ ಮೀರಿದೆ! ಇದರ ಕಾರ್ಯಕ್ಷೇತ್ರವು ದಕ್ಷಿಣ ಭಾರತದ ಆರು ಸಂಸ್ಥಾನಗಳನ್ನು ಆವರಿಸಿದೆ! ಸಿಬ್ಬಂದಿಯು ಸುಮಾರು 500ಕ್ಕೆ ಏರಿದೆ! ಮಂಗಳೂರು-ಮಡಿಕೇರಿಗಳಲ್ಲಿ ಬೇಂಕಿನ ಗಿರಾಕಿಗಳಿಗೆ "ಸೇಫ್ ಡಿಪೋಜಿಟ್ ವೋಲ್ಟ್" ಸೌಕರ್ಯಗಳನ್ನು ಇದು ಒದಗಿಸುತ್ತಿದೆ!

ಬೇಂಕಿನ ಈ ಸರ್ವತೋಮುಖ ಅಭಿವೃದ್ಧಿಗೆ ಕಾರಣರಾದ ಇದರ ಸಹಸ್ರಾರು ಭಾಗಿದಾರರಿಗೆ, ಗ್ರಾಹಕರಿಗೆ ಹಾಗೂ ಹಿತಚಿಂತಕರಿಗೆ ನಮ್ಮ ಅನಂತಾನಂತ ಪ್ರಣಾಮಗಳು!!

# The Canara Banking Corporation Limited

**Head Office: UDIPI (S. India.)**

**1906** GOLDEN JUBILEE YEAR **1956**

Edited, Printed & Published by K. V. Shenoy
at The Prabhat Printers, Ltd., Mangalore.